ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 10 ನೇ ಮಾರ್ಚ್, 2020

ಕಲಬೆರಕೆ ಆಹಾರ ಮತ್ತು ಆಹಾರ ಇಲಾಖೆಯ ನಿರ್ಲಕ್ಷ್ಯ

ಶ್ರೀ ಎನ್. ಅಪ್ಪಾಜಿಗೌಡ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

481 (779) ಮಾನ್ಯ ಆಹಾರ ಮತ್ತು ನಾಗರೀಕ ಸರಬರಾಜು ಹಾಗೂ ಗ್ರಾಹಕರ ವ್ಯವಹಾರಗಳ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯದಲ್ಲಿ ಬೆಣ್ಣೆ ಮತ್ತು ತುಪ್ಪ ತಯಾರಿಸುವ ಒಟ್ಟು ಎಷ್ಟು ಸಂಸ್ಥೆಗಳಿವೆ; ಕೆಲವು ಸಂಸ್ಥೆಗಳು ತಯಾರಿಸುತ್ತಿರುವ ಬೆಣ್ಣೆ ಅಥವಾ ತುಪ್ಪದಲ್ಲಿ ಮಿಕ್ಸಿಂಗ್ ಇರುವುದನ್ನು ಟಿ.ವಿ. ವಾಹಿನಿಯಲ್ಲಿ ಸಮಗ್ರವಾಗಿ ತೋರಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ಸರ್ಕಾರ ಈ ಎಲ್ಲಾ ತಯಾರಿಕಾ ಸಂಸ್ಥೆಗಳಿಗೆ ಆಕಸ್ಮಿಕ ಭೇಟಿ ನೀಡಿ ಎಷು ಬಾರಿ ಪರಿಶೀಲನೆ ನಡೆಸಿದೆ; ಎಷ್ಟು ಸ್ಯಾಂಪಲ್ ಪರೀಕ್ಷೆಗೆ ಒಳಪಡಿಸಿದೆ; (ವಿವರ ಒದಗಿಸುವುದು)

(ಇ) ನಕಲಿ ಬೆಣ್ಣೆ ತುಪ್ಪ ಹಾಗೂ ಮಿಕ್ಸಿಂಗ್ ಬೆಣ್ಣೆ ತುಪ್ಪ ತಯಾರಿಸಿರುವ ಸಂಸ್ಥೆಯವರ ಮೇಲೆ ಇದುವರೆಗೆ ಯಾವ ಕ್ರಮ ಜರುಗಿಸಲಾಗಿದೆ; ಈ ಕಲಬೆರಕೆ ದಂಧೆ ತಡೆಯಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು;

(ಈ) ಆಹಾರ ಇಲಾಖೆಯವರು ಬೆಂಗಳೂರಿನಲ್ಲಿ ಎಷ್ಟು ಅಂಗಡಿಗಳಿಗೆ ಎಷ್ಟು ಹೋಟಲ್‌ಗಳಿಗೆ ಧಿಡೀರನೆ ಭೇಟಿ ನೀಡಿ, ಅಲ್ಲಿ ಮಾರಾಟವಾಗುತ್ತಿರುವ ಮತ್ತು ಹೋಟಲ್‌ಗಳಲಿ ಉಪಯೋಗಿಸುತ್ತಿರುವ ಬೆಣ್ಣೆ ತುಪ್ಪಗಳನ್ನು ಪರೀಕ್ಷೆಗೆ ಒಳಪಡಿಸಿದೆ; ಇದರಿಂದ ಕಂಡು ಬಂದ ಅಂಶಗಳೇನು;

(ಉ) ಮೇಲ್ಕಂಡ ಪ್ರಕರಣಕ್ಕೆ ಸಂಬಂಧಿಸಿದಂತೆ, ಎಷ್ಟು ಹೋಟಲ್, ಅಂಗಡಿ ಮತ್ತು ತಯಾರಿಕಾ ಸಂಸ್ಥೆಗಳ ಮೇಲೆ ಕ್ರಮ ಜರುಗಿಸಲಾಗಿದೆ? (ಹೋಟಲ್, ಅಂಗಡಿ, ತಯಾರಿಕಾ ಸಂಸ್ಥೆ ಹೆಸರು ಸಮೇತ ಸಂಪೂರ್ಣ ವಿವರ ನೀಡುವುದು)